# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | | 107(42) |
| ಸದಸ್ಯರ ಹೆಸರು | | ಶ್ರೀ ಕೆ.ಟಿ. ಶ್ರೀಕಂಠೇಗೌಡ |
| ಉತ್ತರಿಸಬೇಕಾದ ದಿನಾಂಕ | | 21.09.2020 |
| ಉತ್ತರಿಸಬೇಕಾದ ಸಚಿವರು | | ಉಪ ಮುಖ್ಯಮಂತ್ರಿಗಳು (ಉನ್ನತ ಶಿಕ್ಷಣ) |
| ಪ್ರಶ್ನೆ | | ಉತ್ತರ |
| ಅ) | ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಅತಿಥಿ ಉಪನ್ಯಾಸಕರು ಎಷ್ಟು ವರ್ಷಗಳಿಂದ ಸೇವೆ ಸಲ್ಲಿಸುತ್ತಿದ್ದಾರೆ; | ಕಾಲೇಜು ಶಿಕ್ಷಣ ಇಲಾಖೆಯ ಸರ್ಕಾರಿ ಪ್ರಥಮದರ್ಜೆ ಕಾಲೇಜುಗಳಲ್ಲಿ ಪ್ರತಿ ಶೈಕ್ಷಣಿಕ ವರ್ಷದಲ್ಲಿ ಕೋರ್ಸ್/ಕಾಂಬಿನೇಷನ್ ಮತ್ತು ವಿದ್ಯಾರ್ಥಿಗಳ ಪ್ರವೇಶಾತಿ ಸಂಖ್ಯೆಗನುಗುಣವಾಗಿ ಉದ್ಭವಿಸುವ ಬೋಧನಾ ಕಾರ್ಯಭಾರವನ್ನು ಮೊದಲು ಖಾಯಂ ಅಧ್ಯಾಪಕರಿಗೆ ಹಂಚಿಕೆ ಮಾಡಿ, ನಂತರ ಉಳಿಕೆಯಾಗುವ ಹೆಚ್ಚುವರಿ ಬೋಧನಾ ಕಾರ್ಯಭಾರವನ್ನು ನಿರ್ವಹಿಸಲು 2003-04 ರಿಂದ ಅತಿಥಿ ಉಪನ್ಯಾಸಕರ ಸೇವೆಯನ್ನು ಬಳಸಿಕೊಳ್ಳಲಾಗುತ್ತಿದೆ. ಅದರಂತೆ ಹೆಚ್ಚುವರಿ ಬೋಧನಾ ಕಾರ್ಯಭಾರವನ್ನು ನಿರ್ವಹಿಸಲು ಆಯಾ ಶೈಕ್ಷಣಿಕ ವರ್ಷಕ್ಕೆ (10 ತಿಂಗಳಿಗೆ ಮಾತ್ರ) ಮಾತ್ರ ಸೀಮಿತಗೊಳಿಸಿ, ತಾತ್ಕಾಲಿಕವಾಗಿ ಅತಿಥಿ ಉಪನ್ಯಾಸಕರುಗಳ ಸೇವೆಯನ್ನು ಬಳಸಿಕೊಳ್ಳಲಾಗುತ್ತಿದೆ. |
| ಆ) | ಇವರಿಗೆ ನೀಡುತ್ತಿರುವ ವೇತನ ಎಷ್ಟು; ಎಷ್ಟು ತಿಂಗಳ ವೇತನ ಬಾಕಿ ಇದೆ. | ಸರ್ಕಾರದ ಆದೇಶ ಸಂಖ್ಯೆ:ಇಡಿ/66/ಡಿಸಿಇ/2017, ದಿನಾಂಕ:04.04.2017ರನ್ವಯ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅತಿಥಿ ಉಪನ್ಯಾಸಕರಲ್ಲಿ ಸ್ನಾತಕೋತ್ತರ ಪದವಿ ಪರೀಕ್ಷೆಯಲ್ಲಿ ಕನಿಷ್ಠ ಶೇ.55ರಷ್ಟು ಅಂಕಗಳನ್ನು ಪಡೆದು ಎನ್ಇಟಿ/ ಎಸ್ಎಲ್ಇಟಿ ಅಥವಾ ಪಿ.ಹೆಚ್‌ಡಿ ಹೊಂದಿರುವ ಅತಿಥಿ ಉಪನ್ಯಾಸಕರಿಗೆ ಮಾಸಿಕ ಗೌರವಧನದ ಮೊತ್ತವನ್ನು ಮಾರ್ಚ್-2017 ರಿಂದ ಜಾರಿಗೆ ಬರುವಂತೆ ರೂ.11,500/-ರಿಂದ ರೂ.13,000/-(ಹದಿಮೂರು ಸಾವಿರ ರೂಪಾಯಿಗಳು ಮಾತ್ರ) ಗಳಿಗೆ ಹಾಗೂ ಸ್ನಾತಕೋತ್ತರ ಪದವಿ ಪಡೆದ ಅತಿಥಿ ಉಪನ್ಯಾಸಕರ ಮಾಸಿಕ ಗೌರವಧನದ ಮೊತ್ತವನ್ನು ರೂ.9,500/- ರಿಂದರೂ.11,000/-(ಹನ್ನೊಂದು ಸಾವಿರ ರೂಪಾಯಿಗಳು ಮಾತ್ರ)ಗಳಿಗೆ ಹೆಚ್ಚಿಸಲಾಗಿದೆ.<br><br>2019-20ನೇ ಶೈಕ್ಷಣಿಕ ಸಾಲಿನ ಅತಿಥಿ ಉಪನ್ಯಾಸಕರ ಗೌರವಧನಕ್ಕೆ ಸಂಬಂಧಿಸಿಂತೆ, ಜುಲೈ-2019 ರಿಂದ 23.03.2020ರ ವರೆಗೆ ಅಂದರೆ ಲಾಕ್‌ಡೌನ್ ಪ್ರಾರಂಭವಾದ ದಿನಾಂಕ:24.03.2020ರ ನಿಕಟ ಪೂರ್ವ ದಿನಾಂಕದವರೆಗೆ ಸಂಭಾವನೆಯನ್ನು ಪಾವತಿಸಲಾಗಿರುತ್ತದೆ. 2020-21ನೇ ಶೈಕ್ಷಣಿಕ ಸಾಲಿನಲ್ಲಿ ತರಗತಿಗಳು ಇನ್ನೂ ಪ್ರಾರಂಭಗೊಂಡಿರದ ಹಿನ್ನೆಲೆಯಲ್ಲಿ ಅತಿಥಿ ಉಪನ್ಯಾಸಕರನ್ನು ನೇಮಕ ಮಾಡಿಕೊಂಡಿರುವುದಿಲ್ಲ. ಆದ್ದರಿಂದ ಪ್ರಸ್ತುತ ಶೈಕ್ಷಣಿಕ ಸಾಲಿನಲ್ಲಿ ಯಾವುದೇ ಗೌರವಧನ ಬಾಕಿ ಇರುವುದಿಲ್ಲ. |

| | | |
|---|---|---|
| ಇ) | ಹೊಸದಾಗಿ ಸಹಾಯಕ ಪ್ರಾಧ್ಯಾಪಕರ ನೇಮಕಾತಿ ಅಧಿಸೂಚನೆ ಹೊರಡಿಸಲಾಗಿದೆಯೇ; | ಇಲಾಖೆಯ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಖಾಲಿ ಇರುವ 1242 ಸಹಾಯಕ ಪ್ರಾಧ್ಯಾಪಕರ ಹುದ್ದೆಗಳನ್ನು ಭರ್ತಿ ಮಾಡುವ ಸಂಬಂಧ ಸರ್ಕಾರದ ಅಧಿಸೂಚನೆ ಸಂಖ್ಯೆ:ಇಡಿ/257/ಡಿಸಿಇ/2019(ಭಾ-3) ದಿ:08.07.2020ರಲ್ಲಿ ಅಂತಿಮ ವಿಶೇಷ ನೇಮಕಾತಿ ನಿಯಮಗಳನ್ನು ಪ್ರಕಟಿಸಲಾಗಿದ್ದು, ಸಹಾಯಕ ಪ್ರಾಧ್ಯಾಪಕರ ಹುದ್ದೆಗಳನ್ನು ಭರ್ತಿ ಮಾಡಿಕೊಳ್ಳಲು ಅಧಿಸೂಚನೆಯನ್ನು ಹೊರಡಿಸಿರುವುದಿಲ್ಲ. |
| ಈ) | ಇದರಿಂದ ಅತಿಥಿ ಉಪನ್ಯಾಸಕರು ಕೆಲಸವನ್ನು ಕಳೆದು ಕೊಳ್ಳುತ್ತಿರುವುದು ಸರ್ಕಾರದ ಗಮನದಲ್ಲಿದೆಯೇ; | ಸಹಾಯಕ ಪ್ರಾಧ್ಯಾಪಕರ ಹುದ್ದೆ ಭರ್ತಿಗೆ ಸಂಬಂಧಿಸಿದಂತೆ, ಇನ್ನು ನೇಮಕಾತಿ ಅಧಿಸೂಚನೆಯನ್ನು ಹೊರಡಿಸದೇ ಇರುವುದರಿಂದ ಈ ಪ್ರಶ್ನೆ ಉದ್ಭವಿಸುವುದಿಲ್ಲ. |
| ಉ) | ನೆರೆ ರಾಜ್ಯ ಪಶ್ಚಿಮ ಬಂಗಾಳ ಹಾಗೂ ಇತರೆ ರಾಜ್ಯಗಳ ಮಾದರಿಯಲ್ಲಿ ಅತಿಥಿ ಉಪನ್ಯಾಸಕರಿಗೆ ಉದ್ಯೋಗ ಭದ್ರತೆ ನೀಡಿ ಸೇವಾ ವಿಲೀನಗೊಳಿಸಲು ಸರ್ಕಾರ ಕೈಗೊಂಡ ಕ್ರಮಗಳೇನು? | ಇಂತಹ ಪ್ರಸ್ತಾವನೆ ಸರ್ಕಾರದ ಮುಂದೆ ಇರುವುದಿಲ್ಲ. |

ಇಡಿ 157 ಡಿಸಿಇ 2020

(ಡಾ. ಅಶ್ವಥ್ ನಾರಾಯಣ ಸಿ.ಎನ್.)
ಉಪ ಮುಖ್ಯಮಂತ್ರಿಗಳು (ಉನ್ನತ ಶಿಕ್ಷಣ)